# ಕರ್ನಾಟಕ ವಿಧಾನ ಪರಿಷತ್

1. ಸದಸ್ಯರ ಹೆಸರು : ಶ್ರೀ ಮಾನೆ ಶ್ರೀನಿವಾಸ್
2. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 929
3. ಉತ್ತರಿಸಬೇಕಾದ ದಿನಾಂಕ : 13-03-2020

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಕೇಂದ್ರ ಸರ್ಕಾರದ ಮಹತ್ತರ ಯೋಜನೆಯಾದ ಮಹಾತ್ಮಗಾಂಧಿ ಉದ್ಯೋಗ ಖಾತ್ರಿ ಯೋಜನೆಯಡಿಯಲ್ಲಿ ಕೈಗೊಳ್ಳಲಾದ ಅಭಿವೃದ್ಧಿ ಕಾಮಗಾರಿಗಳಿಗೆ ಸರ್ಕಾರದಿಂದ ಕೂಲಿ ವೆಚ್ಚ ಹಾಗೂ ಸಾಮಗ್ರಿಗಳಿಗೆ ಬಾಕಿ ಇರುವ ಹಣ ಎಷ್ಟು; | ಮಹಾತ್ಮಗಾಂಧಿ ನರೇಗಾ ಯೋಜನೆಯಡಿ 2019-20ನೇ ಸಾಲಿನಲ್ಲಿ ಇದುವರೆಗೂ (ದಿನಾಂಕ: 09-03-2020) ರೂ. 140.73 ಕೋಟಿ ಕೂಲಿ ಮತ್ತು ರೂ. 701.26 ಕೋಟಿ ಸಾಮಗ್ರಿ ಮೊತ್ತ ಪಾವತಿಗೆ ಬಾಕಿ ಇರುತ್ತದೆ. |
| ಆ) | ಬಿಡುಗಡೆಗೊಳಿಸದೇ ಇದ್ದಲ್ಲಿ, ವಿಳಂಬಕ್ಕೆ ಕಾರಣಗಳೇನು; | ಮಹಾತ್ಮಗಾಂಧಿ ನರೇಗಾ ಯೋಜನೆಯ ಪ್ರಧಾನ ಸುತ್ತೋಲೆ ಕಂಡಿಕೆ ಸಂಖ್ಯೆ: 7.1.2ರಲ್ಲಿ ಜಿಲ್ಲಾ ಮಟ್ಟದಲ್ಲಿನ ಸಾಮಗ್ರಿ ವೆಚ್ಚವು ಶೇಕಡಾ 40 ರ ಮಿತಿಯನ್ನು ಮೀರದಂತೆ ನಿರ್ದೇಶನವಿರುತ್ತದೆ. ಕೇಂದ್ರ ಮತ್ತು ರಾಜ್ಯ ಸರ್ಕಾರಗಳಿಂದ ಕಾಲಕಾಲಕ್ಕೆ ಬಿಡುಗಡೆಯಾಗುವ ಅನುದಾನದ ಲಭ್ಯತೆ ಮತ್ತು ಕೂಲಿ ಸಾಮಗ್ರಿಗಳ ಅನುಪಾತಗಳ ಆಧಾರದ ಮೇಲೆ ಬಾಕಿ ಪಾವತಿಗಳನ್ನು ಪಾವತಿಸಲು ವಿಳಂಬವಿಲ್ಲದಂತೆ ಕ್ರಮವಹಿಸಲಾಗುತ್ತಿದೆ. |
| ಇ) | ಉದ್ಯೋಗ ಖಾತ್ರಿ ಯೋಜನೆಯಡಿಯಲ್ಲಿ ಕೈಗೊಳ್ಳಲಾದ ಅಭಿವೃದ್ಧಿ ಕಾಮಗಾರಿಗಳಿಗೆ ಸರ್ಕಾರದಿಂದ ಕೂಲಿ ವೆಚ್ಚ ಹಾಗೂ ಸಾಮಗ್ರಿ ವೆಚ್ಚ ಬಿಡುಗಡೆಗೊಳಿಸಲು ಬೇಕಾಗುವ ಕಾಲಾವಕಾಶವೆಷ್ಟು? | ಮಹಾತ್ಮ ಗಾಂಧಿ ನರೇಗಾ ಯೋಜನೆಯು ಕೇಂದ್ರ ಪುರಸ್ಕೃತ, ಹಕ್ಕು ಮತ್ತು ಬೇಡಿಕೆ ಆಧಾರಿತ ಕಾರ್ಯಕ್ರಮವಾಗಿರುತ್ತದೆ. ಯೋಜನೆಯ ವೆಚ್ಚವನ್ನು ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಶೇಕಡ 90:10ರ ಅನುಪಾತದಲ್ಲಿ ಹಂಚಿಕೊಂಡು ನಿರ್ವಹಿಸಲಾಗುತ್ತಿದೆ. ಕೂಲಿ ವೆಚ್ಚವನ್ನು ಕೇಂದ್ರ ಸರ್ಕಾರವೇ ಸಂಪೂರ್ಣವಾಗಿ ಭರಿಸುತ್ತದೆ. ಸಾಮಗ್ರಿ ವೆಚ್ಚವನ್ನು ಶೇಕಡ 75:25ರ ಅನುಪಾತದಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಭರಿಸುತ್ತವೆ.<br>ಕಾರ್ಮಿಕ ಆಯವ್ಯಯಕ್ಕೆ ಅನುಗುಣವಾಗಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳಿಂದ ಕಾಲಕಾಲಕ್ಕೆ ಅನುದಾನವು ಬಿಡುಗಡೆಯಾಗುತ್ತಿದ್ದು, ಸದರಿ ಅನುದಾನದಿಂದ ಯೋಜನೆಯ ಮಾರ್ಗಸೂಚಿಗಳನ್ವಯ ಜಿಲ್ಲಾ ಮಟ್ಟದಲ್ಲಿ 40% ಸಾಮಗ್ರಿ ವೆಚ್ಚ ಮೀರದಂತೆ ಬಾಕಿ ಮೊತ್ತವನ್ನು ಪಾವತಿಸಲು ಕ್ರಮವಹಿಸಲಾಗುತ್ತಿದೆ. ಬಾಕಿ ಇರುವ ಕೂಲಿ ಮತ್ತು ಸಾಮಗ್ರಿ ಮೊತ್ತವನ್ನು ಬಿಡುಗಡೆ ಮಾಡಲು ಕೇಂದ್ರ ಸರ್ಕಾರವನ್ನು ಕೋರಿದ್ದು, ಬಿಡುಗಡೆಯಾದ ತಕ್ಷಣವೇ ರಾಜ್ಯದ ಪಾಲನ್ನು ಸೇರಿಸಿ ಜಿಲ್ಲೆಗಳಿಗೆ ಒದಗಿಸಲು ಕ್ರಮವಹಿಸಲಾಗುವುದು. |

ಸಂಖ್ಯೆ: ಗ್ರಾಅಪ 38(119) ಉಖಾಯೋ 2019

(ಕೆ.ಎಸ್.ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು